ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಅನುದಾನಿತ ಶಾಲಾ ಕಾಲೇಜುಗಳಲ್ಲಿ 2015ನೇ ಸಾಲಿನವರೆಗೆ ಖಾಲಿ ಇರುವ ಹುದ್ದೆ ಭರ್ತಿ ಬಗ್ಗೆ

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ):-

98 (301) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೇ:-

(ಅ) ಅನುದಾನಿತ ಶಾಲಾ ಕಾಲೇಜುಗಳಲ್ಲಿ 2015ನೇ ಸಾಲಿನವರೆಗೆ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದ ಅನುಮತಿಯಂತೆ ಶಿಕ್ಷಣ ಇಲಾಖೆಯಿಂದ ಆರ್ಥಿಕ ಇಲಾಖೆಗೆ ಅನುಮೋದನೆಗಾಗಿ ಸಲ್ಲಿಕೆಯಾಗಿರುವ ಪ್ರಸ್ತಾವನೆಗಳ ಸಂಖ್ಯೆ ಎಷ್ಟು; (ಪ್ರಾಥಮಿಕ, ಪ್ರೌಢ, ಪದವಿಪೂರ್ವ, ಪದವಿ ಕಾಲೇಜುಗಳ ವಿವರಗಳೊಡನೆ)

(ಆ) ಸದರಿ ಕಡತಗಳಿಗೆ ಆರ್ಥಿಕ ಇಲಾಖೆ ಕೋವಿಡ್-19ರ ಆರ್ಥಿಕ ಮಿತವ್ಯಯದ ಅಡಿ ಅನುಮೋದನೆಗೆ ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಹಾಗಿದ್ದಲ್ಲಿ, ಸದರಿ ಮಿತವ್ಯಯವನ್ನು ಸಡಿಲಿಸಿ, ಶಿಕ್ಷಣ ಇಲಾಖೆಯಿಂದ ಬರುವ ಎಲ್ಲಾ ಪ್ರಸ್ತಾವನೆಗಳಿಗೂ ಯಾವ ಕಾಲಮಿತಿಯಲ್ಲಿ ಅನುಮೋದನೆ ನೀಡಲಾಗುವುದು ?